ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 23ನೇ ಮಾರ್ಚ್, 2020

ಖಾಸಗಿ ಶಿಕ್ಷಣ ಸಂಸ್ಥೆಗಳು

ಶ್ರೀ ರಘುನಾಥ್‌ರಾವ್‌ಮಲ್ಕಾಪೂರೆ(ವಿಧಾನಸಭೆಯಿಂದಚುನಾಯಿತರಾದವರು):-

1495 (1732) ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದಲ್ಲಿರುವ ಖಾಸಗಿ ಅನುದಾನಿತ ಶಿಕ್ಷಣ ಸಂಸ್ಥೆಗಳು ಸಾರ್ವಜನಿಕರಿಂದ ವಿಪರೀತ ಡೊನೇಷನ್ ಅಥವಾ ಶುಲ್ಕ ವಸೂಲಿ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಆ) ವಿದ್ಯಾರ್ಥಿಗಳಿಂದ ಇಂತಿಷ್ಟೇ ಡೊನೇಷನ್ ಅಥವಾ ಶುಲ್ಕವನ್ನು ತೆಗೆದುಕೊಳ್ಳಬೇಕೆಂದು ಸರ್ಕಾರ ಸುತ್ತೋಲೆ ಹೊರಡಿಸಿದೆಯೇ; (ಸುತ್ತೋಲೆ ಪ್ರತಿ ಒದಗಿಸುವುದು)

(ಇ) ಸರ್ಕಾರದ ಸೂಚನೆಗಿಂತ ಹೆಚ್ಚು ಡೊನೇಷನ್ ಅಥವಾ ಶುಲ್ಕ ವಸೂಲು ಮಾಡಿರುವ ಶಾಲೆಗಳ ವಿರುದ್ಧ ಯಾವುದಾದರೂ ದೂರು ದಾಖಲಾಗಿದೆಯೇ ; ಇದ್ದಲ್ಲಿ, ಎಷ್ಟು ದೂರುಗಳು ದಾಖಲಾಗಿವೆ ; (ಸಂಪೂರ್ಣ ತಾಲ್ಲೂಕುವಾರು, ಶಾಲೆ/ಕಾಲೇಜುಗಳವಾರು ಮಾಹಿತಿ ನೀಡುವುದು)

(ಈ) ಸರ್ಕಾರದ ಸೂಚನೆಗಿಂತ ಹೆಚ್ಚು ಡೊನೇಷನ್ ಅಥವಾ ಶುಲ್ಕ ವಸೂಲಿ ಮಾಡಿದ ಶಿಕ್ಷಣ ಸಂಸ್ಥೆಗಳ ವಿರುದ್ಧ ಸರ್ಕಾರ ಕೈಗೊಳ್ಳುವ ಕ್ರಮವೇನು ?